

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 145(1051) |
| ಮಾನ್ಯ ಸದಸ್ಯರ ಹೆಸರು | ಶ್ರೀ ನಿರಾಣಿ ಹನುಮಂತ್ ರುದ್ರಪ್ಪ (ಪದವೀಧರರ ಕ್ಷೇತ್ರ) ವಿಧಾನ ಪರಿಷತ್ತಿನ ಸದಸ್ಯರು. |
| ಉತ್ತರಿಸುವ ಸಚಿವರು | ಮಾನ್ಯ ಉಪ ಮುಖ್ಯಮಂತ್ರಿಗಳು(ಉನ್ನತ ಶಿಕ್ಷಣ) |
| ಉತ್ತರಿಸಬೇಕಾದ ದಿನಾಂಕ | 16.03.2020 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಬೆಳಗಾವಿಯಲ್ಲಿರುವ ರಾಣಿ ಚನ್ನಮ್ಮ ವಿಶ್ವವಿದ್ಯಾಲಯದ ಅಧೀನದಲ್ಲಿರುವ ಮಹಾವಿದ್ಯಾಲಯಗಳಲ್ಲಿ ವ್ಯಾಸಂಗ ಮಾಡಿ, ನಿಗದಿತ ಸಮಯದಲ್ಲಿ ಪದವಿ ಪೂರ್ಣಗೊಳಿಸಲಾಗದೇ ಅವಕಾಶ ವಂಚಿತರಾಗುತ್ತಿರುವ ವಿದ್ಯಾರ್ಥಿಗಳಿಗೆ ಕೊನೆಯ ಸುವರ್ಣಾವಕಾಶ (ಗೋಲ್ಡನ್ ಚಾನ್ಸ್)ವನ್ನು ಕಲ್ಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಕರ್ನಾಟಕ ಉನ್ನತ ಶಿಕ್ಷಣ ಪರಿಷತ್ತಿನ ಶಿಫಾರಸ್ಸಿನ ಮೇರೆಗೆ ಉನ್ನತ ಶಿಕ್ಷಣ ಇಲಾಖೆಯ ವ್ಯಾಪ್ತಿಯಡಿಯ ವಿಶ್ವವಿದ್ಯಾಲಯಗಳ ವಿದ್ಯಾರ್ಥಿಗಳು ಒಂದು ವರ್ಷದ ಕೋರ್ಸುಗಳನ್ನು ಮೂರು ವರ್ಷಗಳೊಳಗಾಗಿ ಹಾಗೂ ಇತರೆ ಪದವಿ ಕೋರ್ಸುಗಳನ್ನು ನಿಗದಿತ ಕಾಲಮಿತಿಯ ಎರಡರಷ್ಟು ಅವಧಿಯ ( Double the duration of the Course) ಒಳಗಾಗಿ ಪೂರ್ಣಗೊಳಿಸಲು ಅವಕಾಶ ನೀಡುವ ಕುರಿತಂತೆ ಸರ್ಕಾರದ ಪತ್ರ ಸಂಖ್ಯೆ: ಇಡಿ 13 ಯುಕೆಎಸ್ 2014, ದಿನಾಂಕ 16.01.2015ರಲ್ಲಿ ಸೂಚನೆಗಳನ್ನು ನೀಡಲಾಗಿದೆ (ಪ್ರತಿ ಲಗತ್ತಿಸಿದೆ).<br><br>ಸರ್ಕಾರದ ಸೂಚನೆಯಲ್ಲಿ ಪ್ರಸ್ತಾಪಿಸಿರುವ ಅವಧಿಯನ್ನು ಮೀರಿ ಹೆಚ್ಚುವರಿ ಕಾಲಮಿತಿಯನ್ನು ನೀಡಲು ಅವಕಾಶವಿರುವುದಿಲ್ಲ. ರಾಣಿ ಚನ್ನಮ್ಮ ವಿಶ್ವವಿದ್ಯಾಲಯದ "ಸುವರ್ಣಾವಕಾಶ" ಯೋಜನೆಯನ್ನು ಸರ್ಕಾರದ ಸೂಚನೆಗಳನ್ವಯ ಜಾರಿಗೊಳಿಸಲು ವಿಶ್ವವಿದ್ಯಾಲಯವು ಸಕ್ಷಮ ಪ್ರಾಧಿಕಾರವಾಗಿರುತ್ತದೆ. |
| (ಆ) | ಪ್ರಸಕ್ತ ಶೈಕ್ಷಣಿಕ ಸಾಲಿನಲ್ಲಿಯೇ ಸದರಿ ವಿದ್ಯಾರ್ಥಿಗಳಿಗೆ ಕೊನೆಯ ಸುವರ್ಣಾವಕಾಶ (ಗೋಲ್ಡನ್ ಚಾನ್ಸ್)ವನ್ನು ಕಲ್ಪಿಸಲಾಗುವುದೇ; | |
| (ಇ) | ಹಾಗಿದ್ದಲ್ಲಿ, ಸದರಿ ಸುವರ್ಣಾವಕಾಶವನ್ನು ಯಾವ ಕಾಲಮಿತಿಯಲ್ಲಿ ನೀಡಲಾಗುವುದು? | |

ಸಂಖ್ಯೆ: ಇಡಿ 61 ಯುಆರ್‌ಸಿ 2020

(ಡಾ. ಅಶ್ವತ್ ನಾರಾಯಣ್ ಸಿ.ಎನ್)
ಉಪ ಮುಖ್ಯಮಂತ್ರಿ (ಉನ್ನತ ಶಿಕ್ಷಣ, ಐಟಿ ಮತ್ತು ಬಿಟಿ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ)



ಕ್ರಮಾಂಕ: ಇಡಿ 13 ಯುಕೆವಿಎ 201

ಕರ್ನಾಟಕ ಸರ್ಕಾರ

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 16-01-2015

ಇಂದ
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ,
ಬೆಂಗಳೂರು - 560 001.

ಇವರಿಗೆ

1) ಕುಲಸಚಿವರು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-560056.
2) ಕುಲಸಚಿವರು, ಮೈಸೂರು ವಿಶ್ವವಿದ್ಯಾಲಯ, ಮೈಸೂರು-570005.
3) ಕುಲಸಚಿವರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-580003.
4) ಕುಲಸಚಿವರು, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ-585106.
5) ಕುಲಸಚಿವರು, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ-577451.
6) ಕುಲಸಚಿವರು, ಕನ್ನಡ ವಿಶ್ವವಿದ್ಯಾಲಯ, ಹಂಪಿ-583276.
7) ಕುಲಸಚಿವರು, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು.
8) ಕುಲಸಚಿವರು, ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ, ಬೆಳಗಾವಿ.
9) ಕುಲಸಚಿವರು, ತುಮಕೂರು ವಿಶ್ವವಿದ್ಯಾಲಯ, ತುಮಕೂರು.
10) ಕುಲಸಚಿವರು, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.
11) ಕುಲಸಚಿವರು, ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ.
12) ಕುಲಸಚಿವರು, ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ, ಬಳ್ಳಾರಿ
13) ಕುಲಸಚಿವರು, ರಾಣಿ ಚನ್ನಮ್ಮ ವಿಶ್ವವಿದ್ಯಾಲಯ, ಬೆಳಗಾವಿ.
14) ಕುಲಸಚಿವರು, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ.
15) ಕುಲಸಚಿವರು, ಕರ್ನಾಟಕ ರಾಜ್ಯ ಸಂಸ್ಕೃತ ವಿಶ್ವವಿದ್ಯಾಲಯ, ಜಯಚಾಮರಾಜೇಂದ್ರ ಸಂಸ್ಕೃತ ಕಾಲೇಜು ಆವರಣ, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-560018.
16) ಕುಲಸಚಿವರು, ಡಾ. ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯ, ವಿಜಯನಗರ 4ನೇ ಹಂತ, 2ನೇ ಘಟ್ಟ, ಬಸವನಹಳ್ಳಿ ಅಂಚೆ, ಮೈಸೂರು-570017.
17) ಕುಲಸಚಿವರು, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ, ರಾಷ್ಟ್ರೀಯ ಹೆದ್ದಾರಿ-4, ಶಿಗ್ಗಾಂವಿ, ತಾ. ಹಾವೇರಿ ಜಿಲ್ಲೆ-581205.

ಮಾನ್ಯರೆ,

ವಿಷಯ:- ಬಿ.ಎಸ್ಸಿ. (ಕಂಪ್ಯೂಟರ್ ಸೈನ್ಸ್) ಕೋರ್ಸನ್ನು ಪೂರ್ಣಗೊಳಿಸುವ ಗರಿಷ್ಠ ಅವಧಿ 6 ವರ್ಷದಿಂದ 10 ವರ್ಷಗಳವರೆಗೆ ವಿಸ್ತರಿಸುವ ವಿಷಯಕ್ಕೆ ಸಂಬಂಧಿಸಿದಂತೆ ಪ್ರಸ್ತುತ ಜಾರಿಯಲ್ಲಿರುವ (ಕರ್ನಾಟಕ ವಿಶ್ವವಿದ್ಯಾಲಯ) ನಿಯಮವನ್ನು (Regulation) ತಿದ್ದುಪಡಿ ಮಾಡುವ ಬಗ್ಗೆ.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉನ್ನತ ಶಿಕ್ಷಣ ಪರಿಷತ್ ವು ಕೆಳಕಂಡಂತೆ ನಿರ್ಣಯಿಸಿರುತ್ತದೆ

"ರಾಜ್ಯದ ವಿಶ್ವವಿದ್ಯಾಲಯಗಳಲ್ಲಿ ಆಡಳಿತಾತ್ಮಕ ಹಾಗೂ ಪರೀಕ್ಷಾ ವಿಷಯಗಳಲ್ಲಿ ಏಕರೂಪತೆ ತರುವ ಬಗ್ಗೆ ಹೆಚ್ಚಿನ ಅಧ್ಯಯನ ನಡೆಸಲು ಬೆಂಗಳೂರು ವಿಶ್ವವಿದ್ಯಾಲಯದ

ಕುಲಪತಿಗಳ ಅಧ್ಯಕ್ಷತೆಯಲ್ಲಿ ಮಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳನ್ನೊಳಗೊಂಡಂತೆ 3 ವಿಶ್ವವಿದ್ಯಾಲಯಗಳ ಕುಲಸಚಿವರ ಸಮಿತಿಯನ್ನು ರಚಿಸಲು ಹಾಗೂ ವಿದ್ಯಾರ್ಥಿಗಳು ತಮ್ಮ ಒಂದು ವರ್ಷದ ಅವಧಿಯ ಪದವಿಯನ್ನು ಮೂರು ವರ್ಷಗಳೊಳಗಾಗಿ ಮತ್ತು ಇತರೆ ಪದವಿಗಳ ವಿದ್ಯಾರ್ಥಿಗಳು ತಮ್ಮ ಪದವಿಯನ್ನು double the duration of the course ನ ಒಳಗಾಗಿ ಪೂರ್ಣಗೊಳಿಸಲು ತೀರ್ಮಾನಿಸಲಾಯಿತು"

ಆದರಂತೆ ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳು ಕ್ರಮ ವಹಿಸುವಂತೆ ತಮ್ಮನ್ನು ಕೋರಲು ನಾನು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಸಂಧ್ಯಾ ಎಲ್. ನಾಯಕ್)
ಸರ್ಕಾರದ ಆಧೀನ ಕಾರ್ಯದರ್ಶಿ
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ-2)

ministerg@gmail.com